## ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1633**
**ಸದಸ್ಯರ ಹೆಸರು : ಶ್ರೀ ಗೋವಿಂದರಾಜು**
**ಉತ್ತರಿಸುವ ಸಚಿವರ : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು**
**ಉತ್ತರಿಸುವ ದಿನಾಂ : 11.03.2022.**

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕೋಲಾರ ಜಿಲ್ಲೆಯಲ್ಲಿ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿರುವ ಭಾರಿ ವಾಹನಗಳ ದಟ್ಟಣೆ ನಿಯಂತ್ರಿಸಲು ಸರ್ಕಾರದ ವತಿಯಿಂದ "ಟ್ರಕ್ ಟರ್ಮಿನಲ್" ನಿರ್ಮಿಸುವ ಉದ್ದೇಶ ಹೊಂದಿದೆಯೇ; | ಹೌದು.<br>ಪೀಲವಾರ ಗ್ರಾಮದ ಸ.ನಂ.98ರಲ್ಲಿ ಸರ್ಕಾರಿ ಗೋಮಾಳ ಜಮೀನು ಲಭ್ಯವಿದ್ದಲ್ಲಿ, ಟ್ರಕ್ ಟರ್ಮಿನಲ್ ನಿರ್ಮಾಣಕ್ಕಾಗಿ ಸರ್ಕಾರಿ ರಿಯಾಯಿತಿ ದರದಲ್ಲಿ ಕನಿಷ್ಠ 50 ಎಕರೆ ಜಮೀನನ್ನು ಮಂಜೂರು ಮಾಡುವಂತೆ ಜಿಲ್ಲಾಧಿಕಾರಿಗಳನ್ನು ಕೋರಲಾಗಿರುತ್ತದೆ. |
| ಆ. | ಹೊಂದಿದ್ದಲ್ಲಿ, ಯಾವ ಸ್ಥಳವನ್ನು ಗುರುತಿಸಲಾಗಿದೆ; ಅದರ ವಿಸ್ತೀರ್ಣ ಹಾಗೂ ಅದನ್ನು ಕಾರ್ಯರೂಪಕ್ಕೆ ತರಲು ಸರ್ಕಾರ ನಿಗಧಿಪಡಿಸಿರುವ ಅನುದಾನವೆಷ್ಟು; | |
| ಇ. | ರಾಜ್ಯದ ಎಲ್ಲಾ ತಾಲ್ಲೂಕು ಮಟ್ಟದಲ್ಲಿ ಒಂದೊಂದು "ಟ್ರಕ್ ಟರ್ಮಿನಲ್"ಗಳನ್ನು ನಿರ್ಮಿಸಲು ಸರ್ಕಾರ ಕ್ರಮ ಕೈಗೊಂಡಿದೆಯೇ; | ಡಿ.ದೇವರಾಜ ಅರಸ್ ಟ್ರಕ್ ಟರ್ಮಿನಲ್ಸ್ ಲಿ. ಕಂಪನಿಯು ಬೆಂಗಳೂರಿನ ಯಶವಂತಪುರ, ಮೈಸೂರು ಮತ್ತು ಧಾರವಾಡಗಳಲ್ಲಿ ಟ್ರಕ್ ಟರ್ಮಿನಲ್ ನಿರ್ಮಿಸಿದ್ದು, ರಾಜ್ಯದ ಎಲ್ಲಾ ನಗರಗಳಲ್ಲಿ ಟ್ರಕ್ ಟರ್ಮಿನಲ್ಸ್ ನಿರ್ಮಿಸಲು ಕಾರ್ಯಯೋಜನೆ ಹಾಕಿಕೊಳ್ಳಲಾಗಿದೆ. ಮುಂಬರುವ ದಿನಗಳಲ್ಲಿ ತಾಲ್ಲೂಕು ಮಟ್ಟದಲ್ಲಿ ಟ್ರಕ್ ಟರ್ಮಿನಲ್ಸ್ ನಿರ್ಮಿಸಲು ಕಾರ್ಯ ಯೋಜನೆ ರೂಪಿಸಲಾಗುವುದು.<br>ಸದರಿ ಯೋಜನೆಗಳನ್ನು ಭೂ ಲಭ್ಯತೆಯ ಹಾಗೂ ಅನುದಾನ ಲಭ್ಯತೆಯ ಆಧಾರದ ಮೇಲೆ ಕೈಗೆತ್ತಿಕೊಳ್ಳಲಾಗುವುದು. |
| ಈ. | ದೇವರಾಜ ಅರಸ್ ಟ್ರಕ್ ಟರ್ಮಿನಲ್ಸ್ ಲಿ. ಸಂಸ್ಥೆಗೆ ಕಳೆದ ಮೂರು ವರ್ಷದಿಂದ ಆಯವ್ಯಯದಲ್ಲಿ ಎಷ್ಟು ಅನುದಾನವನ್ನು ಒದಗಿಸಲಾಗಿದೆ? | 2019-20ನೇ ಸಾಲಿನಲ್ಲಿ ಸರ್ಕಾರವು ರೂ 1.00 ಲಕ್ಷಗಳ ಅನುದಾನ ಒದಗಿಸಿದ್ದು, 2020-21 ಮತ್ತು 2021-22ನೇ ಸಾಲಿನಲ್ಲಿ ಯಾವುದೇ ಅನುದಾನ ಒದಗಿಸಿರುವುದಿಲ್ಲ. |

ಸಂಖ್ಯೆ: ಟಿಡಿ 78 ಟಿಸಿಕ್ಯೂ 2022

**(ಬಿ.ಶ್ರೀರಾಮುಲು)**
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು